# ಪದಗಳ ಪರಿವಿಡಿ

ಲಲಿತ ಸಾಹಿತ್ಯ ಮಾಲೆ ಜಾಲೀಹಾಳ (ತಾ॥ ಪಟ್ಟದಕಲ್ಲು)

# ಪತಂಗ

(ಮಕ್ಕಳ ಕವಿತಾ ಸಂಕಲನ)



ಪರಶುರಾಮ ಹ ಚಿತ್ರಗಾರ
ಜಾಲೀಹಾಳ



ಪ್ರಕಾಶಕರು.
ಬಸವಣ್ಣದೇವರು ಶಿವಾನಂದಮಠ ರೋಣ,
ಸಾ॥ ಪಟ್ಟದಕಲ್ಲು.

ಮುದ್ರಣ.
ನ್ಯೂ ಗದಗ ಪ್ರಿಂಟರಿ, ಗದಗ.



೧೯೫೭ ಅಗಸ್ಟ
ಪ್ರಥಮ ಮುದ್ರಣ
೧೦೦೦ ಪ್ರತಿಗಳು

ಬೆಲೆ. ೫೦ ನಯಾಪೈಸೆ

## — ಸಲಹಾ ಸಮಿತಿ —

ಶ್ರೀ ಎಂ. ಅಕಬರಅಲಿ ಬಿ. ಎ. ಆ
ಡಿ. ಪಿ. ಎಡ್ ಶಿರಹಟ್ಟಿ
ಶ್ರೀ ಗಣೇಶ ಗ್ರಾಮಪುರೋಹಿತ,
ಸೀ ಎಂ. ಎ.
ಶ್ರೀ ದೇವೇಂದ್ರ ಮಾಧವರಾವ
ಬಿ. ಎ. ಆ
ಶ್ರೀ ಯ. ಹ. ಚಂದ್ರಗಿರಿ.

ಶ್ರೀ ಸಂಗಮೇಶ ಹೊಸಮನಿ
ಶ್ರೀ ಸಿಂಪಿ ಲಿಂಗಣ್ಣ.
ಶ್ರೀ ಎಸ್. ಎನ್ ಬಾಣದ
ಬಿ ಎ. ಆ
ಶ್ರೀ ದೇವರಾಯ ಗುದ್ನೆಣ್ಣವರ
ಶ್ರೀ ಪರಶುರಾಮ ಚಿತ್ರಗಾರ.
ಶ್ರೀ ಮಹಾಂತ ಗುಲಗಂಜಿ.

## ● ಇದೇ ಲೇಖಕರ ಮುಂಬರುವ ಕೃತಿಗಳು ●

(೧) **ಕಿಡಿ ಕಿಡಿ ಕಡ್ಡಿ** (ಮಕ್ಕಳ ಸರಸ ಕವಿತೆಗಳು)

(೨) **ಗೋಲಿಗುಂಡು**

(ಅಚ್ಚಿನಲ್ಲಿವೆ)

ಪ್ರಕಾಶಕರು- **ಬಸವಂಣದೇವರು ಶಿವಾನಂದಮಠ ಪಟ್ಟದಕಲ್ಲು**
**ತಾ. ಬದಾಮಿ.**



ನಮ್ಮ ಪುಸ್ತಕ ಮಾರಾಟಗಾರರು

**ಆಶಾ ಸಾಹಿತ್ಯ ಮಂದಿರ ಬಿಜಾಪೂರ.**
**ಶಿವಾನಂದಾಶ್ರಮ ಮಂಗಳಗುಡ್ಡ ಅಂಚೆ ಬದಾಮಿ.**
**ಕ. ಗಂ ಸಾಲೆ ಪಟ್ಟದಕಲ್ಲು ,, ,,**
**ಬಿಂದುಮಾಧವರ ಬುಕ್‌ಸ್ಟಾಲ್ ಬದಾಮಿ.**

# ಮುನ್ನುಡಿ

ಇದು ಮಕ್ಕಳಿಗಾಗಿ ಎಂದು ಬರೆದ ಕವನಗಳದೊಂದು ಸಂಕಲನ, ನನ್ನಿಂದ ಮುನ್ನುಡಿ ಬರೆಯಿಸಬೇಕೆಂದು ಇದರ ಲೇಖಕರ ಅಪೇಕ್ಷೆಯಿದ್ದುದರಿಂದ ನಾನಿಲ್ಲಿ ಎರಡು ಮಾತುಗಳನ್ನು ಬರೆಯುತ್ತಲಿದ್ದೇನೆ.

ಗ್ರಂಥದ ಮುನ್ನುಡಿಯೆಂದರೆ ಅದು ವಿಮರ್ಶೆಯಲ್ಲ. ಹಿರಿಯರಾದವರಿಂದ ಹೊಸ ಸಾಹಿತ್ಯಿಕರು ಬಯಸುವ ಒಳ್ಳುನುಡಿಯಷ್ಟೆ! ಹಿರಿಯರೆಂದು ಭಾವಿಸಿದವರು ‘ ಭಲೆ ’ ಎಂದು ಬೆನ್ನು ತಟ್ಟಿದರೆ, ಹೊಸ ಸಾಹಿತ್ಯಕರಿಗೆ ಅದೊಂದು ಸಂತೃಪ್ತಿ ಈ ಸಂತೃಪ್ತಿ ಅವರನ್ನು ಮುನ್ನಡೆಗೆ ಪ್ರೋತ್ಸಾಹಿಸಿ, ಒಳ್ಳೆಯ ಕೃತಿಗಳ ನಿರ್ಮಾಣಕ್ಕೂ ಕಾರಣವಾಗುವ ಸಂಭವವಿರುವುದು.

ಚಿಕ್ಕತನದಲ್ಲಿ ಮಕ್ಕಳ ಪಾಠವು ಹಾಡು-ಕವಿತೆಗಳಿಂದಲೇ ಪ್ರಾರಂಭವಾಗುವುದು. ಚಿಕ್ಕತನದಲ್ಲಿ ಹೆಚ್ಚು ಹೆಚ್ಚು ಹಾಡು-ಕವಿತೆಗಳನ್ನು ಕಲಿತ ಮಕ್ಕಳಿಗೆ, ಅವು ಅವರ ಭವಿಷ್ಯದ ಬುದ್ಧಿ-ಭಾವನೆಗಳ ಬೆಳವಣಿಗೆಗೆ ಕಟ್ಟಿದ ಬುತ್ತಿಯಂತಾಗುವುವು ಸುಲಭವಾಗಿ ಅರ್ಥ ತಿಳಿಯುವ ಶಿಶುಗೀತಗಳು ಅವರಿಗೆ ಆಟದಲ್ಲಿಯೆ ಮುಖಪಾಠವಾಗುವುವು, ಅರ್ಥವು ಸ್ವಲ್ಪ ಕಠಿಣವೆನಿಸುವ ಗೀತ-ಕವನಗಳನ್ನು ಸಮಯದೊರೆತಾಗಲೆಲ್ಲ ಹಿರಿಯರು ಹೇಳಿ ಪಾಠಮಾಡಿಸಬೇಕು. ಆಗ ಅವು ಮಕ್ಕಳಿಗೆ ತಿಳಿಯದ ಮಂತ್ರಗಳಂತೆ ಕಂಡರೂ, ಬೆಳೆಯುತಿರುವಾಗ ಅವುಗಳ ಅರ್ಥವಾಗಿ, ತಾವು ಚಿಕ್ಕತನದಲ್ಲಿ ಪಾಠಮಾಡಿದ ಕವನ-ಹಾಡುಗಳ ಬೆಲೆ ಎಂತಹುದೆಂಬುದು ತಿಳಿಯುವುದು ಪ್ರಾಸ, ಶಬ್ದಾಲಂಕಾರ, ಛಂದೋನೃತ್ಯಗಳಿಂದ ಕೂಡಿದ ಕವಿತೆಗಳನ್ನು ಅರ್ಥಬೋಧೆಯಾಗದಿದ್ದರೂ, ನಾದಲೀಲೆಗೆ ಮರುಳಾಗಿ ಮಕ್ಕಳು ಸಹಜವಾಗಿ ಕಲಿತುಕೊಳ್ಳುವರು.

ಮಕ್ಕಳಿಗಾಗಿ ಬರೆಯುವ ಕಾವ್ಯ–ಕವನಗಳು ಎಂತಹವಿರಬೇಕೆಂಬುದರ ಬಗೆಗೆ, ಇಂದಿನ ಕಾಲದಲ್ಲಿ ಸಾಕಷ್ಟು ವಿಚಾರ ಮಾಡಲಾಗಿದೆ, ವಯಸ್ಸು, ಮನಸ್ಸು, ಲೋಕಪರಿಚಯ ಇವುಗಳಿಗೆ ಅನುಗುಣವಾದ ಕಾವ್ಯ-ಕವನಗಳು ಮಕ್ಕಳಿಗೆ ಹೆಚ್ಚು ಪ್ರಯೋಜನಕಾರಿಯಾಗುವುವು, ಮೆಚ್ಚಿಕೆಗೂ ಪಾತ್ರವಾಗುವವು.

ಈ ಸಂಕಲನದಲ್ಲಿಯ ಅನೇಕ ಕವನಗಳು ಚಿಕ್ಕಮಕ್ಕಳಿಗೆ ಸಹಜವಾಗಿ ತಿಳಿಯುವಂತಿವೆ ಅವರು ನಿತ್ಯವೂ ನೋಡುವ ಕಾಗೆ ಪೊರಕೆ, ಉಗಿಬಂಡಿ, ಪತಂಗ, ಬೀಸಣಿಕೆ ಮೊದಲಾದವುಗಳ ವಿಷಯಕ ಕವಿತೆಗಳು, ಅವರಿಗೆ ಹೆಚ್ಚು ಪ್ರಿಯವೆನಿಸಬಲ್ಲವು. 'ಕಾಶಿಯಯಾತ್ರೆ' ಕವನದಲ್ಲಿ ಹುದುಗಿದ ಕತೆಯ ಮರ್ಮವನ್ನು ಹಿರಿಯರು ಹುಡುಗರಿಗೆ ಹೇಳಿಕೊಡಬೇಕಾದೀತು. ದೇಶಭಕ್ತಿ, ದೈವಭಕ್ತಿ-ವಿಷಯಕ ಕವನಗಳನ್ನು ಪಾಠಮಾಡಿಸಬೇಕು. ' ಸಿದ್ಧಿಕ ಸಿದ್ಧಿ ' ' ಮಿರಾಯಿ ' ಮೊದಲಾದ ಕವನಗಳನ್ನು ಅಭಿನಯ ಗೀತಗಳನ್ನಾಗಿ ಕಲಿಸಬಹುದು. ಶ್ರೀ ಪರಶುರಾಮ ಚಿತ್ರಗಾರರ ಶಿಶುಸಾಹಿತ್ಯ ನಿರ್ಮಿತಿಯ ಈ ಮೊದಲ ಪ್ರಯತ್ನ ಸಾಕಷ್ಟು ಆಶಾದಾಯಕವಿದೆ. ಅವರ ಅಭ್ಯಾಸ-ಅನುಭವಗಳು ಅವರಿಂದ ಇನ್ನೂ ಹೆಚ್ಚಿನ ಕಾರ್ಯವನ್ನು ಮಾಡಿಸಲಿ

**ಧಾರವಾಡ**
ತಾ ೮—೭—೫೭

**ಬೆಟಗೇರಿ ಕೃಷ್ಣಶರ್ಮ.**

---

# ಅ ಭಿ ಪ್ರಾ ಯ

ಮಕ್ಕಳ ಸಾಹಿತ್ಯವು ಕನ್ನಡದಲ್ಲಿ ಸಾಕಷ್ಟು ಬೆಳೆದು ಬಂದಿಲ್ಲ. ಆ ಕೊರತೆಯನ್ನು ನೀಗುವದಕ್ಕಾಗಿ ಇತ್ತಿತ್ತಲಾಗಿ ಹಲವಾರು ಕವಿಗಳು ಪ್ರಯತ್ನಿಸುತ್ತಿದ್ದಾರೆ ಎಳೆಯ ಮಕ್ಕಳ ಭಾವವನ್ನು ವಿಸ್ತೃತಗೊಳಿಸುವ ಕತೆ, ಕವನಗಳು ಬೆಳೆದು ಬರುತ್ತಿರುವದು ಆನಂದದ ಸಂಗತಿ. ಅಂತಹ ಕವಿಗಳ ಮಾಲೆಯಲ್ಲಿ ಶ್ರೀ ಚಿತ್ರಗಾರರೂ ಒಬ್ಬರು, ಅವರಿಗೆ ಮಕ್ಕಳನ್ನು ಕಂಡರೆ ಇಲ್ಲದ ಪ್ರೀತಿ, ಹುಡುಗರು ಹಾಡಿ ಕುಣಿಯುವವನ್ನು ಕಂಡರೆ ಅವರಿಗೆ ಮನಾನಂದ. ಬಾಲಕರ ಎದುರಿಗೆ 'ಪತಂಗ'ವನ್ನು ಹಾರಿಬಿಟ್ಟು ಅವರಿಗೆ ತುಂಬ ಉಪಕಾರ ಮಾಡಿದ್ದಾರೆ. 'ಮಕ್ಕಳಿಗೆ, ಮಿರಾಯಿ' ಹಂಚಿ ಸಾಹಿತ್ಯದ ರುಚಿ ತೋರಿಸಿದ್ದಾರೆ 'ಪೊರಕೆ'ಯಿಂದ 'ಬಣ್ಣದ ಬೀಸಣಿಕೆ'ಯ ವರೆಗೆ ನಾನಾ ವಿಷಯಗಳನ್ನು ಕುರಿತು ಬರೆದ ಅವರ ಕವನಗಳು ನಿಜವಾಗಿ ಮನೋಹರವಾಗಿವೆ. ಕವಿಯ ಭಾಷೆ ಸರಳವಾಗಿದ್ದು ಸುಂದರವಾಗಿದೆ. ಅಲ್ಲಲ್ಲಿ ಅಂತ್ಯ ಪ್ರಾಸವು ತಪ್ಪಿತೆಂದು ತಿಳಿದರೂ ಕಾವ್ಯದ ಒಡಲಿಗೆ ಕೊರತೆಯಿಲ್ಲ. ಚಿತ್ರಗಾರನು ಬರೆದ ವಾಕ್ಚಿತ್ರ, ಒಟ್ಟಿನಲ್ಲಿ ಸಚಿತ್ರವಾಗಿದೆ ಅವರ ಲೆಕ್ಕಣಿಕೆ ಇಂತಹ ಸುಂದರ ಕವನಗಳನ್ನು ಇನ್ನಷ್ಟು ಬರೆಯಲಿ. ಚಿಕ್ಕಮಕ್ಕಳ ಕವನದ ಕಣಜ ತುಂಬಲಿ.

**ಬಸವೇಶ್ವರ ಕಾಲೇಜ ಬಾಗಿಲಕೋಟೆ**
೧೫—೭—೧೯೫೭

**ಸುಂಕಾಪೂರ ಎಮ್. ಎಸ್.**

# ಅಭಿಪ್ರಾಯಗಳು.

"ತಿಳಿಬಿಳಿ ಹಾಳಿಯು ದೇಹ, ಸಿಬಿರಿನ ಎರಡೇ ಎಲುಬಿನ ಹಂದರ, ಕೆಳಗಡೆ ಚಿಕ್ಕ ಪುಚ್ಛವುಳ್ಳ ಮುದ್ದಿನ ಪತಂಗವನ್ನು ಶ್ರೀ ಪರಶುರಾಮ ಚಿತ್ರಗಾರ ಅವರು ಹಾರಿಸಿ ಕನ್ನಡ ಕುವರರ ಕೈಗೆ ಹೊಸ ಆಟಿಗೆಯನ್ನಿತ್ತಿದ್ದಾರೆ "ನಾನೂ ಚಿಕ್ಕವ ನೀನೂ ಚಿಕ್ಕವ, ಗೆಳೆತನ ಕಟ್ಟಲು ನೀನೇ ತಕ್ಕವ, ಆಡಿಸಿ ಹಾಡಿಸಿ ನಗಿಸಲು ಬಲ್ಲವ" ಎಂಬ ಆತ್ಮೀಯ ಸ್ನೇಹವನ್ನು ಬೀರಿದ್ದಾರೆ. "ಗಾಳಿಗುದುರೆ ಹಾರಿ ಏರಿ ಬಯಲನೆಲ್ಲ ಸುತ್ತುವ, ಗುಡುಗು ಮಿಂಚುಗಳನು ಬೀರಿ ನಡುಗನೆದೆಗೆ ತರುವ" ಮುಗಿಲ ಮಾಲೆ ತೋರಿಸುತ್ತಲೂ ಓದುವದೊಂದೇ ನಿನ್ನ ಗುರಿಯೆಂದು ನೆನಪುಕೊಟ್ಟಿದ್ದಾರೆ ದೇವನಿತ್ತಿಹ ಇನಿತು ಸೊಬಗು ನಿನಗಿರುತಿರಲು ಕಾಣುವೊಡೆ ಕಣ್ಣೊಂದು ಬೇಕು ನಿನಗೆ"ನ್ನುತ್ತ ಗೂಡಿನ ಮರಿಗುಬ್ಬಿ, ಕರಿಯ ಕಾಗೆ, ಟಾಂಗಾದ ಕುದುರೆಗಳನ್ನು ತೋರಿಸಿ ಬಿಡದೆ, ಉಗಿಬಂಡಿ ಗುಲಾಬಿಹೂ-ಪೊರಕೆಗಳಂತೆ ಬಿರುಗಾಳಿ-ಮಳೆರಾಯರ ಮುಂದೆ ನಿಲ್ಲಿಸಿ ದೇವನಾಟವನ್ನು ನಿರುಕಿಸಲು ಬಯಲಿನೆಡೆಗೆ ಕರೆತಂದಿದ್ದಾರೆ. ಹಡೆದತಾಯಿ, ನಾಡತಾಯಿ, ಗಾಂಧಿ ಅಜ್ಜ 'ಅವರ ಕಡೆಗೆ ಬೆರಳು ಮಾಡಿ ಸೂಚಿಸಿದ್ದಾರೆ. "ನಿಜವನೆ ನುಡಿಯುವ ನುಡಿದಂತೆ ನಡೆಯುವ ಬುದ್ಧಿಬಲವನು ನೀಡೆಂ"ಬ ಪ್ರಾರ್ಥನೆಯನ್ನು ಹಾಡಿಸಿದ್ದಾರೆ.

ಅಂದದಿ ಆಡುವ ಮಕ್ಕಳ ನೋಡಲು
ಬರುವನು ದೇವನು ಹರುಷದಲಿ ।
ಕಾಣದೆ ಕುಳಿತು ನಲಿದೊಲಿಯುವನು
ಮೋಡದ ಬಂಡಿಯನೇರುತಲಿ ॥

ಇಂಥ ಕಲ್ಪನಾಲೋಕದಲ್ಲಿ ವಿಹರಿಸಿದರೂ, ಉಗಿಬಂಡಿಯಲ್ಲಿ ಗದ್ದಲವಿದ್ದಾಗಲೂ ಸ್ಥಳ ಹಿಡಿದುಕೊಂಡು ಮಲಗಿದ ಕಾಶೀಯಾತ್ರಿಕರ ಭಕ್ತಿಯನ್ನು ರಟ್ಟುಗೊಳಿಸಿದ್ದಾರೆ. "ಹಾಡುತ ಕುಣಿಯುತ ನಲಿಯುತುಬ್ಬಿನಿಂದ ನಮ್ಮೀ ಪ್ರಾರ್ಥನೆ ಸಲಿಸುವ" ಕಲೆಯೊಡನೆ, ಪ್ರಾರ್ಥನೆ ನಾಲಗೆಯ ಮೇಲಿರಿಸಿ ಕವಿಯುತಿಹ ಕತ್ತಲೆಯ ಮೊತ್ತದೂಡುವ" ಉಪಾಯವನ್ನೂ ತಿಳಿಪಡಿಸಿದ್ದಾರೆ.

ದೀನರ ಭವನದಿ ಧನಿಕರ ನಿಲಯದಿ
ಒಂದೇ ಭಾವದಿ ದುಡಿಯುವ ಪೊರಕೆ

ಯ ಆದರ್ಶವನ್ನು ಗುರುತಿಸಿದರೂ, ಕಲ್ಲ ಕೊನರಿಸುವಂಥ ಕಲೆಯ ಚೆಲು ವಿನ ಬಳ್ಳಿಯನ್ನು ಕಂಡು ಹಿಗ್ಗುವ ಸಹೃದಯತೆಯನ್ನು ತೋರಿದ್ದಾರೆ ಸಾಹಿ ತ್ಯಕ್ಕೆ ಸಹೃದಯತೆಯೇ ಸಾರ್ಥಕ್ಯವೆಂದು ನನ್ನ ಎಣಿಕೆ ಸಹೃದಯತೆಯ ದಾರಿಯಲ್ಲಿ ಕಲ್ಲು-ಕಾಗೆಗಳೂ ಒಡನಾಡಿಯಾಗಬಲ್ಲವು. ಅವು ಅವ್ಯಕ್ತಭಾಷೆ ಯಲ್ಲಿ ಉಸುರುವ ಕನ್ನಡದ ಐಸಿರಿ, ಒಸಸಿರಿಗಳು ನಾಲಗೆಗೆ ನಿತ್ಯ ರಸದೂಟ ವಾಗಲಾರವೇ ? ಸಹಜ ಸಹೃದಯತೆಯನ್ನು ಬಿತ್ತುವ 'ಪತಂಗ'ದಂಥ ಆಟಿ ಗೆಯನ್ನಿತ್ತ ಶ್ರೀ ಪರುಶುರಾಮ ಚಿತ್ರಗಾರ ಅವರ ಕೃತಿಯನ್ನು ಕನ್ನಡಿಗರು ಸಂತೋಷದಿಂದ ಸ್ವಾಗತಿಸಬೇಕೆಂದು ಬಗೆಯುವೆನು

೯–೬–೫೭ — ಸಿಂಪಿಲಿಂಗಣ್ಣ ಚಡಚಣ.

"ಮಕ್ಕಳ ಜೊತೆಯಲ್ಲಿ, ಮಕ್ಕಳಿಗಾಗಿ ಹಾಡಿ ಹಾರಿಸಿದ ಈ ಪತಂಗ ಅವರ ಮನಸ್ಸನ್ನು ನಿಜಕ್ಕೂ ಆಕರ್ಷಿಸುವಂತಿದೆ ನವುರಾಗಿಯೂ, ತೆಳುವಾ ಗಿಯೂ, ಬಣ್ಣಬಣ್ಣವಾಗಿಯೂ ಇರುವ ಭಾವಗಳಿಂದ ಪತಂಗದಲ್ಲಿರುವ ಪದ್ಯ ಗಳು ಮಕ್ಕಳಿಗೆ ಮನೋಹರವಾಗಿವೆ, ಮಕ್ಕಳ ಪದ್ಯಗಳಲ್ಲಿ ನೀತಿ ನಿಚ್ಚಳ ವಾಗಿ ಮೂಡಿರಬೇಕೆಂಬ ಹವ್ಯಾಸಕ್ಕೆ ಇವರು ಕಟ್ಟುಬೀಳದೆ ಅವರ ಸಂತೋ ಷವನ್ನೇ ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ಸಹಜವಾಗಿ ಬರೆಯುತ್ತ ಹೋದರೆ ಇವರ ಪದ್ಯಗಳು ಇನ್ನೂ ಸುಂದರವಾಗಬಲ್ಲವೆಂದು ನನಗೆ ತೋರು ತ್ತದೆ".

— ಚೆನ್ನವೀರ ಕಣವಿ

"ಮಕ್ಕಳ ಮನೋರಂಗವನ್ನು ಪ್ರವೇಶಿಸಿ, ಅವರೊಡನೆ ಒಂದಾಗಿ ಹಾಡಿದ ಹಾಡು, ಮಕ್ಕಳ ಮನಸ್ಸನ್ನು ಅರಳಿಸುವುದಲ್ಲದೆ ಒಳ್ಳೆಯ ಶಿಶು ಸಾಹಿತ್ಯವಾಗದಿರದು. ಆ ದಿಸೆಯಲ್ಲಿ ಮೊದಲ ಹೆಜ್ಜೆಯಿಟ್ಟಿರುವ ಗೆಳೆಯ ಚಿತ್ರಗಾರರು ಸರಲವಾದ ಶಬ್ದಸರಣಿ, ಲಯಬಂಧವಾದ ಶೈಲಿ, ಮಕ್ಕಳಿಗೆ ಪ್ರಿಯವಾದ ವಸ್ತು—ಇವೆಲ್ಲವುಗಳಿಂದಾಗಿ ಹೆಚ್ಚಿನ ಸಾರ್ಥಕತೆಯನ್ನು ಪಡೆದಿದ್ದಾರೆಂದು ಹೇಳಬಹುದು."

— ಎಂ. ಆಕಬರಅಲಿ, ಶಿರಹಟ್ಟಿ.

॥ ಶ್ರೀ ಗುರು ಶಿವಾನಂದಾಯನಮಃ ॥

# ಪ್ರಕಾಶಕನ ನಾಲ್ಕು ಮಾತು

ಪುರಾತನರ ಆತ್ಮ ಚರಿತೆಯನ್ನು ಪಠಿಸಿ ಸಂತೃಪ್ತಿಗೊಂಡ ನನ್ನ ಅಂತ ರಾತ್ಮದಲ್ಲಿ 'ಲೋಕ ಕಲ್ಯಾಣಕಾರ್ಯವನ್ನು' ಎಸಗಬೇಕೆಂಬುದೊಂದು ಸದು ದ್ದೇಶ. ಅದಕ್ಕಾಗಿ ಹಂಬಲಿಸುತ್ತಿದ್ದೆ, ಅದು ಇಂದು ಕೊನರಿತು ' ಪತಂಗ ' ವೆಂಬುದೊಂದು ಪುಷ್ಪವನ್ನು ಮೂಡಿಸಿ ಸದ್ವಾಸನೆಯನ್ನು ಹರಡಿತು.

ಚಿಕ್ಕ ವಯಸ್ಸಿನಲ್ಲಿ ನನಗಾಗಿ ವಿದ್ಯೆಯನ್ನು ಕಲಿಸಿ ಹೋದ ಗುರುಗಳು ನನ್ನ ಮನಸ್ಸು ಪರಿವರ್ತನೆಯನ್ನು ಹೊಂದಿ 'ಸನ್ಯಾನಾಶ್ರಮ' ತೆಗೆದುಕೊಂಡ ನಂತರ ಮರಳಿ 'ಪಟ್ಟದಕಲ್ಲಿಗೆ' ಬಂದರು ಅವರೇ ಈ ಕವನ ಸಂಕಲನವನ್ನು ಹಾರಿಸಿದವರು ಸ್ವಲ್ಪಕಾಲ ಅಗಲಿಹೋದ ಆತ್ಮಗಳು ಮರಳಿ ಬೆರೆತು ಕೊಂಡವು ಮೊದಲೇ ಭಾವನಾಮಯ ಜೀವಿಗಳು ತಾವು ಬರೆದ ಕೆಲವು ಪದ ಗಳನ್ನು ನನ್ನ ಮುಂದೆ ಹಾಡಿ ತೋರಿಸಿದರು. ನಾನು ಕೇಳಿ ಸಂತಸಪಟ್ಟೆ ಈ ಪುಸ್ತಕ ಬೆಳಕಿಗೆ ತರ ವೆನೆಂದು ಆಶ್ವಾಸನ ವಿತ್ತೆ ಬಾಲಕರ ಮುದ್ದಿನ ಪದಾರ್ಥವಾದ ಪತಂಗವೆಂಬುದೇ ಈ ಪುಸ್ತಕದ ತಲೆಬರಹ ಈ ಸಂಕಲನ ದೊಳಗಿನ ಪದಗಳು ಹೆಚ್ಚಾಗಿ ಬಾಲಕರ ಮನಸ್ಸನ್ನು ಆಕರ್ಷಿಸುವಂತಿವೆ. ಮನಸೆಳೆವ ಛಂದ್ಯೋನೃತ್ಯಗಳಿಂದ ಮಿರುಗುಗೊಂಡಿವೆ ಅದರಿಂದಾಗಿ ಈ ಪುಸ್ತಕವು ಬಾಲಕರ ಬಾಳಿಗೆ ಬೆಳಕನ್ನೀಯುವದೆಂದು ಹೇಳಬಲ್ಲೆ ಲೇಖಕರು ಪೂರ್ವ ಪದ್ಧತಿಗನುಸಾರವಾಗಿ ಮೊದಲು ಗಣೇಶನ ಸ್ತೋತ್ರ ನಿರ್ಮಿಸಿ ಅಂತ್ಯತ ದಲ್ಲಿ ಕರುಣಾಳುವಿನ ಪ್ರಾರ್ಥನೆಯನ್ನು ಹಾಡಿ ಸಮಾಪ್ತಿ ಮಾಡಿರುವರು. ಇಂತಹ ಕವನ ಸಂಕಲನಗಳನ್ನು ಪ್ರಕಾಶಪಡಿಸುವದು ನಮ್ಮಂತಹ ಅಯ್ಯ ನವರ ಕರ್ತವ್ಯವೆಂದು ಬಗೆದು ಇದನ್ನು ಪ್ರಕಾಶನಕ್ಕೆ ತರಲಾಯಿತು. ಇದು ಭಗವಂತನ ಪ್ರೇರಣೆ ಅಸ್ತು.

ಇಂತಹ ಸತ್ಕಾರ್ಯದಲ್ಲಿ ನನ್ನ ಮನಸ್ಸನ್ನು ಸದಾ ಪ್ರೇರಿಸಲೆಂದು ಶಿವನಲ್ಲಿ ಅರಿಕೆ ಮಾಡಿಕೊಂಡು ಇಂತಹ ಅನೇಕ ಬಗೆಯ ಸಂಕಲನಗಳನ್ನು ಮೇಲಿಂದ ಮೇಲೆ ಬರೆದು ಲೋಕೋಪಕಾರ ಮಾಡಲೆಂದು ಪರುಶುರಾಮ ಚಿತ್ರಗಾರ ಜಾಲಿಹಾಳ ಇವರಲ್ಲಿ ವಿಜ್ಞಾಪಿಸಿ ವಿರಮಿಸುತ್ತೇನೆ.

**ಜೀವನ್ಮುಕ್ತರ ಅಡಿಯಾಳು,**

**ಶಿವಾನಂದಮಠ ರೋಣ.** **ವೇ॥ ಮಂ॥ ಬಸವಣ್ಣದೇವರು**

# ಲೇಖಕನ ನುಡಿ.

ಇದು ನನ್ನ ಮೊದಲನೆಯ ಕೃತಿ ಮಕ್ಕಳಿಗಾಗಿ ಬರೆದುದು ಇದರೊಳಗಿನ ಎಲ್ಲ ಕವನಗಳು ಮಕ್ಕಳು ಸರಾಗವಾಗಿ, ತಾಳಬದ್ಧವಾಗಿ ಹಾಡುವ ಛಂದದಲ್ಲಿವೆಯೆಂದು ನನ್ನ ಭಾವನೆ. ಮಕ್ಕಳು ಹಾಡಿ ಸಂತಸಬಟ್ಟರೆ ಸಾಕು ಅದುವೇ ನನಗೆ ಪರಮಾನಂದ,

ಈ ಕೃತಿಯು ಹೊರ ಬರಲಿಕ್ಕೆ ಸಂಪೂರ್ಣ ಆರ್ಥಿಕ ಸಹಾಯ ನೀಡಿದ, ವೇ ಮೂ ಶ್ರೀ. ಬಸವಣ್ಣದೇವರು ಶಿವಾನಂದಮಠ ರೋಣ ಸಾ ಪಟ್ಟದಕಲ್ಲ ಅವರಿಗೆ ನಾನು ಕೃತಜ್ಞನಾಗಲೇಬೇಕು ಮುನ್ನುಡಿ ಬರೆದು ಆಶೀರ್ವದಿಸಿದ ಕವಿವರ್ಯ ಬೆಟಗೇರಿ ಕೃಷ್ಣಶರ್ಮ ಅವರಿಗೆ ನಾನು ಚಿರಋಣಿ.

ಈ ಸಂಕಲನವನ್ನು ತಿದ್ದಿ ಸಲಹೆ ಸೂಚನೆ ನೀಡಿದ ಆತ್ಮೀಯರಾದ ಶ್ರೀ.ಎಂ. ಅಕಬರ ಅಲಿಯವರು ಎಲ್ಲರೀತಿಯಿಂದ ನೆರವಾದ ಸ್ನೇಹಿತ ಬಂಧುಗಳಾದ ಶ್ರೀ. ಗಣೇಶ ಗ್ರಾಮಪುರೋಹಿತ. ದೇವೇಂದ್ರಮಾಧವನವರ ಎಸ್. ಎಸ್. ಬಾಣದ ದೇವರಾಯ ಗುದ್ನೆಣ್ಣನವರ, ಪಿ ಆ ಪಾಟೀಲ, ಯ ಹ. ಚಂದ್ರಗಿರಿ. ಪ್ರ. ವಿ. ಕರ್ಜಗಿ ಇವರೆಲ್ಲರನ್ನು ಈ ಸಂದರ್ಭದಲ್ಲಿ ಸ್ಮರಿಸುವದು ನನ್ನ ಕರ್ತವ್ಯ.

ಅಂದವಾಗಿ ಮುಖಪುಟದ ಚಿತ್ರ ತೆಗೆದುಕೊಟ್ಟ ಗೆಳೆಯರಾದ ಕಲಾವಿದ ಎಚ್ ರುದ್ರಪ್ಪ ಬದಾಮಿ ಅವರಿಗೆ ನಾನು ಕೇಳಿದ ಕೂಡಲೆ ಅಭಿಪ್ರಾಯ ಬರೆದು ಕಳಿಸಿದ ಕವಿವರ್ಯ ಶ್ರೀ ಚನ್ನವೀರ ಕಣವಿ ಧಾರವಾಡ. ಶ್ರೀ ಸಿಂಪಿ ಲಿಂಗಣ್ಣ ಚಡಚಣ ಪ್ರೊ. ಎಂ. ಎಸ್ ಸುಂಕಾಪೂರ ಮೊದಲಾದವರ ಉದಾರ ಹೃದಯಕ್ಕೆ ನಾನೆಷ್ಟು ಮಣಿದರೂ ತೀರದು ಇದರೊಳಗಿನ ಕೆಲವು ಕವನಗಳನ್ನೂ ಬೆಳಕಿಗೆ ತಂದ ಆಯಾ ಪತ್ರಿಕಾ ಸಂಪಾದಕರಿಗೆ ಕೃತಜ್ಞತೆ ಸಲ್ಲಿಸಿ ನನ್ನ ನುಡಿ ಮುಗಿಸುತ್ತೇನೆ.

**ಪರಶುರಾಮ ಚಿತ್ರಗಾರ,**
**ಚಾಲೀಹಾಳ.**



# ನಮೋ ನಮೋ ಓ ಇಲಿದೇರಾ



ವಿಘ್ನವಿನಾಶಕ ವಿದ್ಯಾದಾಯಕ ।
ನಮೋ ನಮೋ ಓ ಇಲಿದೇರಾ ॥
ಗೌರಿಯ ವರಪುತ್ರನೆ ಗಜವದನನೆ ।
ಕರುಣೆಯದೋರೋ ನೀ ಪೂರಾ ॥ ೧ ॥

ಪಾಶಾಂಕುಶಧರ ಸ್ವರ್ಣಕಿರೀಟಿಯೆ ।
ಅರುಣವಸನಧಾರಿ ॥
ನಿನ್ನೊಲುಮೆಯು ಬಲವಿದ್ದರೆ ಬಾಳ್ವೆವು ।
ಜಗದೊಳು ಹಿತಕಾರಿ ॥ ೨ ॥

ನಿತ್ಯಕಾರ್ಯದೊಳು ಮುತ್ತಿಬರುತಲಿಹ ।
ತೊಂದರೆ ತೊಡರನು ದೂಡು ॥
ಮುಗ್ಧ ಬಾಲರಾ ಭಕುತಿಗೆ ಒಲಿದು ।
ಬುದ್ಧಿ ಬಲವ ನೀಡು ॥ ೩ ॥

ಹೊಂಬಣ್ಣದ ಚೆಲು ಮಂಟಪ ಕಟ್ಟಿ ।
ಮನೆ ಮಠದೊಳು ಇರಿಸಿ ॥
ಪೂಜೆಯುಗೈವೆವು ಭಕ್ತಿಭಾವದಿಂ ।
ಶುದ್ಧ ಮನವನಿರಿಸಿ ॥ ೪ ॥

ಮದ್ದಿನ ಕುಳ್ಳಿ ಪಟಾಕಿಗಳೆಲ್ಲವ।
ಹಾರಿಸುತುಬ್ಬಿನಲಿ ॥
ಕಿಡಿಕಿಡಿಕಡ್ಡಿಯ ಬಣ್ಣದ ಬೆಳಕಿನ।
ಬೆಡಗಿಗೆ ನಲಿಯುತಲಿ ॥ ೫ ॥

ಹಾಡುತ ಕುಣಿಯುತ ನಲಿಯುತುಬ್ಬಿನಿಂ।
ನಮ್ಮೀ ಪ್ರಾರ್ಥನೆ ಸಲಿಸುವೆವು ॥
ಪಾರ್ವತಿಪುತ್ರನೆ ಓ ಶುಭಚರಿತನೆ।
ಜ್ಞಾನವ ನೀಡಲು ಬೇಡುವೆವು ॥ ೬ ॥

---

# ಕೋಳಿ !

ಬೆಳಗಿನ ಗಂಟೆಯು ನಾದವ ಕೇಳಿ |
ನಿದ್ರೆಯ ಮುಸುಕನು ತೆರೆದೆದ್ದೇಳಿ ||

ಅರುಣನು ಕೂಗುವ ಕಾಳಿಯು ಕೂಗು |
ಬಾಲ ಸೂರ್ಯನಾಗಮನಕೆ ಬಾಗು |
ಜೀವನ ಚೈತ್ರಾಗಮನದ ಕಾಲ |
ಜಗದೆದೆಯರಳಿಸಲಿದೊ ಮೂಲ |
ಹಗಲಿರುಳೆರಡರ ಸಂಧಿಯು ಕಾಲವು |
ಬೆಳಗಿನ ಮಂತ್ರಿಗೆ ಸ್ವಾಗತವು |
ಚೇತನ ಚಿಮ್ಮುವದೈ ಚಣಚಣಕೆ |
ದಿನವಿಡಿ ಹುಮ್ಮಸ ತರುವದು ಮನಕೆ |
ಅಲಸಿಕೆಯಳಿಯುತ ಬದುಕನು ದೂಡು |
ಕೆಲಸಕೆ ತ್ವರಿತದಿ ಮನವನು ನೀಡು |
ಓದುವದೊಂದೇ ನಿನ ಗುರಿಯಿರಲಿ |
ಬೆಳಗಿನ ಗಂಟೆಯು ನಿಜ ನೆನಪಿರಲಿ ||

---

# ಬಾ ಬಯಲಿನೆಡೆಗೆ

ಮೂಡಣದ ಬಾನಿನಲಿ ಅರುಣ ಕಾಂತಿಯು ಹೊಮ್ಮೆ ।
ಕೋಳಿ ತಾ ಹೇಳದಲೆ ಕೂಗುತಿಹುದು ॥
ಜನರನೆಬ್ಬಿಸುವಂಥ ದೇವನಾ ಗಂಟೆಗಿದೊ ।
ಅಚ್ಚರಿಯು ನಿನ್ನೊಳಗೆ ಆಗದಿರದು ॥೧॥

ಗುಬ್ಬಿ 'ಚಿಂವ್ ಚಿಂವ್' ಯೆಂದು
ಕಾಗೆ 'ಕಾ ಕಾ' ಯೆಂದು ।
ಕರೆಯುವವು ಗೂಡಿನಿಂ ಪೊರಗೆ ಬಂದು ॥
ಬಾಲ ಸೂರ್ಯನ ಬರವ ಸೂಚಿಸುತ ಸುತ್ತೆಡೆಗೆ ।
ಹಾರುವವು ಹರುಷದಲಿ ಮಿಂದು ಮಿಂದು ॥೨॥

ತಂಗಾಳಿ ತೀಡುವದು ಪರಿಮಳವ ಬೀರುವದು ।
ಪರಿಪರಿಯ ಪೂಗಳಿಂ ತಿರಿದು ತಂದು ॥
ಮಧುರ ಕಂಠದ ಗಾನದಿಂಪಿನಲಿ ಕೋಗಿಲೆಯು ।
ಹಾಡುವದು ಆನಂದ ಉಕ್ಕಿಬಂದು ॥೩॥

ನೀಲ ಗಗನದಿ ತುಂಡು ಬಿಳಿಮೋಡಗಳ ಮೇಲೆ ।
ಪೊಂಗಿರಣದಾ ಕಾಂತಿ ಸುತ್ತು ಹರಡಿ ॥
ಗಿರಿದರಿಗೆ ನೆಲಜಲಕೆ ತರುಲತೆಗೆ ಸಸಿ ಪುಲ್ಗೆ ।
ಮುತ್ತಿಕೊಂಡಿದೆ ವರ್ಣಕಾಂತಿ ಸೂರಾಡಿ ॥೪॥

ದೇವನಿತ್ತಿಹ ಇನಿತು ಸೊಬಗು ನಿನಗಿರುತಿರಲು ।
ಕಾಣುವೊಡೆ ಕಣ್ಣೊಂದು ಬೇಕು ನಿನಗೆ ॥
ಸೌಂದರ್ಯ ಸಾಗರದಿ ಮಿಂದೆದ್ದು ಸುಖಪಡೆಯೆ ।
ಮನೆ ಬಿಟ್ಟು ಬಾ ಬೇಗ ಬಯಲಿನೆಡೆಗೆ ॥೫॥

## ನನ್ನ ಊರು

ನನ್ನೂರಿಹುದು ಹೊಳೆಯ ತಡಿ ।
ಇರುತಿಹವಲ್ಲಿ ಹಲವು ಗುಡಿ ॥೧॥

ಸುತ್ತಲು ಬಂಧುರ ಬೆಟ್ಟದ ಕೋಟೆ ।
ಕಾಂಬುದು ಶಿಲ್ಪಿಯ ಚೆಲುವಿನ ಊಟೆ ॥೨॥

ವಿರುಪಾಕ್ಷನ ಗುಡಿ ಗೋಪುರ ನೋಡು ।
ಭಕ್ತಿ ಭಾವದಿಂ ಬಸವನ ಬೇಡು ॥೩॥

ಶಿಲ್ಪಕಲೆಯನು ಕಲಿಯಲೊ ಗೆಳೆಯ ।
ನಾಡಿನ ಸಿರಿಯನು ಬೆಳೆಸೆಲೊ ಎಳೆಯ ॥೪॥

ಕಲ್ಲೇ ಸಾರುವದೀಪರಿ ಸೊಲ್ಲು ।
ಹೆಸರಿಹುದದಕೆ ಪಟ್ಟದಕಲ್ಲು ॥೫॥

---

# ತಾಯಿಗಿಂತ ಬಂಧುವಿಲ್ಲ

ಪಕ್ಕ ಬರದ ಚಿಕ್ಕ ಗುಬ್ಬಿ ।
ಗೂಡಿನಲ್ಲಿ ಇದ್ದಿತು ॥
ಬಿಕ್ಕಿ ಬಿಕ್ಕಿ ಚಿಕ್ಕ ಗುಬ್ಬಿ ।
ಬಾಯಿ ಬಿಡುತಲಿದ್ದಿತು ॥೧॥

ಹೊರಗಿನಿಂದ ಹಾರಿಬಂದು ।
ತಾಯಿ ಗುಬ್ಬಿ ನೋಡಿತು ॥
ಗೂಡಿನಲ್ಲಿ ಬಾಡಿಗುಬ್ಬಿ ।
ಬಾಯಿ ಬಿಡುತಲಿದ್ದಿತು ॥೨॥

ಅತ್ತಲಿತ್ತ ಸುತ್ತುಮುತ್ತು ।
ಹೊರಳಿ 'ಚಿಂವ್' ಯೆಂದಿತು ॥
ಮುಖವು ಬಾಡಿ ಮೆತ್ತಗಾದ ।
ಮರಿಯ ತಾನು ನೋಡಿತು ॥೩॥

'ಚಿಂವ್ ಚಿಂವ್' 'ಚಿಂವ್ ಚಿಂವ್' ।
ಎಂದು ತಾಯಿ ಚೀರಿತು ॥
ತಾಯಿ ದನಿಗೆ ಬಾಯಿ ತೆರೆದು ।
ಮೊಗವ ಮೇಲೆ ಮಾಡಿತು ॥೪॥

ತಾಯಿ ಪ್ರೇಮದಿಂದ ಹಾರಿ ।
ಮರಿಯು ಬಳಿಗೆ ಬಂದಿತು ॥
ಗುಟುಕು ಕೊಟ್ಟು ಬೇಗನೆದ್ದು ।
ಹೊರಗೆ ಹಾರಿ ಹೋಯಿತು ॥೫॥

ತಾಯಿತನದ ಒಲುಮೆಯನ್ನು ।
ಹಕ್ಕಿ ತಾನು ತೋರಿತು ॥
" ತಾಯಿಗಿಂತ ಬಂಧುವಿಲ್ಲ "
ಎಂಬ ಮಾತು ತಿಳಿಸಿತು ॥೬॥

---

# ಪತಂಗ

ತಿಳಿ ಬಿಳಿ ಹಾಳಿಯ ದೇಹವು ಸುಂದರ ।
ಸಿಬಿರಿನ ಎರಡೇ ಎಲುವಿನ ಹಂದರ ॥
ಕೆಳಗಡೆ ಚಿಕ್ಕದು ಪುಚ್ಛವು ಸಿಂಗರ ।
ಮಕ್ಕಳ ಮುದ್ದಿನ ಪತಂಗವೇ ॥೧॥
ಸೂತ್ರದ ದಾರವೆ ನಿನಗಾಧಾರ ।
ಸುಳಿಸುಳಿ ಗಾಳಿಯೆ ನಿನಗಾಹಾರ ॥
ಬಾಲರ ಮೋದಕೆ ನೀನಾಧಾರ ।
ಮಕ್ಕಳ ಮುದ್ದಿನ ಪತಂಗವೇ ॥೨॥
ಗಗನದಿ ಹಾರುತ ಸುಖವನು ಪಡೆವೆ ।
ಸೃಷ್ಟಿಯ ಸೊಬಗನು ನೋಡುತ ನಲಿವೆ ॥
ನಾನೂ ಜತೆಯಲಿ ಹಾರಲು ಬರುವೆ ।
ಮಕ್ಕಳ ಮುದ್ದಿನ ಪತಂಗವೇ ॥೩॥
ನಾನೂ ಚಿಕ್ಕವ ನೀನೂ ಚಿಕ್ಕವ ।
ಗೆಳೆತನ ಕಟ್ಟಲು ನೀನೆ ತಕ್ಕವ ॥
ಆಡಿಸಿ ಹಾಡಿಸಿ ನಗಿಸಲು ಬಲ್ಲವ ।
ಮಕ್ಕಳ ಮುದ್ದಿನ ಪತಂಗವೇ ॥೪॥
ನಿನ್ನೀ ಒಡಲಿದು ನೋಟಕೆ ಕಿರಿದು ।
ಮಕ್ಕಳ ಕುಣಿಸುವ ಗುಣವಿದೆ ಹಿರಿದು ॥
ನೀನಿರದಿರೆ ಮನ ಬರಿದೋ ಬರಿದು ।
ಮಕ್ಕಳ ಮುದ್ದಿನ ಪತಂಗವೇ ॥೫॥

# ಮುಗಿಲು ಮಾಲೆ

ಕರಿಯ ನೆರೆಯ ವರ್ಣ ತಳೆದು ।
ಮುಗಿಲು ಮಾಲೆ ಮೆರೆಯಿತು ॥
ಬಾನ ತುಂಬ ತುಂಬಿಕೊಂಡು ।
ತಾನೆ ತಾನು ನಲಿಯಿತು ॥

ಗಾಳಿಗುದುರೆ ಹಾರಿ ಏರಿ ।
ಬಯಲನೆಲ್ಲ ಸುತ್ತಿತು ॥
ಗುಡುಗು ಮಿಂಚುಗಳನು ಬೀರಿ
ನಡುಗನೆದೆಗೆ ತಂದಿತು ॥

ಗಿರಿ ಶಿಖರವನೇರಲೆಂದು ।
ಭರದಿ ಮುಂದೆ ಸಾಗಿತು ॥
ತಂಪು ತಾಗೆ ಮೋಹಿನಿಂದ ।
ತಾನೆ ಕೆಳಗೆ ಇಳಿಯಿತು ॥

ನೀರೆ ನೀರು ಆಗಿ ಭೂಮಿ
ಭಾಗ್ಯವೆಲ್ಲ ತೆರೆಯಿತು ॥
ದುಡಿದು ದಣಿದ ರೈತನೆದೆಯು ।
ಹರುಷದಿಂದ ಅರಳಿತು ॥

---

# ಬಣ್ಣದ ಬೀಸಣಿಕೆ

ಬಣ್ಣ ಬಣ್ಣದಿಂ ಶೋಭಿಸುತಿರುವ ।
ಬಣ್ಣದ ಬೀಸಣಿಕೆಯೆ ನೀನು ॥
ತಣ್ಣನ ಗಾಳಿಯ ನುಣ್ಣಗೆ ಈಯುತ ।
ದಣಿದಾಯಾಸವ ಕಳೆಯುವೆ ನೀನು ॥೧॥

ಬಿಸಿಲಿನ ಬೇಗೆಗೆ ಬಳಲುವ ಜೀವಿಯ ।
ಕಸವಿಸಿ ಕಳೆಯುವೆ ಗಾಳಿಯ ಬೀಸಿ ॥
ಗಿರಿಗಿರಿ ತಿರುಗುತ ಹರುಷದಿ ಹಾರುತ ।
ನೀಗುವೆ ಬೇಗೆಯ ಶಾಂತಿಯ ಸೂಸಿ ॥೨॥

ಸಿರಿತನ ದೊರೆತನ ಬಡತನವಿರಲಿ ।
ಇರುತಿಹೆ ಎಲ್ಲರ ಬಳಿಯಲಿ ನೀನು ॥
ಹರುಷದಿ ಜನತೆಯು ಕಾಲವ ಕಳೆಯಲು ।
ನಿರುತವು ಮಣಿಯುವೆ ದಣಿಯುವೆ ನೀನು ॥೩॥

ಚೌಕಾಕಾರದ ದೇಹವು ಕಿರಿದು ।
ಎಸಗುವ ಕಾರ್ಯವು ನಿನ್ನದೆ ಹಿರಿದು ॥
ಫಲಕಾಶಿಸದೆ ದುಡಿಯುವ ನೀನು ।
ಒಡೆಯನ ಸೇವೆಯ ಮಾಡುವೆ ನಲಿದು ॥೪॥

# ಬಿರುಗಾಳಿ

ಬಂದಿತು ಬಂದಿತು ಬಿರುಗಾಳಿ |
ಊರನು ಮುತ್ತಿತು ವೈತಾಳಿ ||೧||

ಗಗನವ ತುಂಬುತ ಕೆಂಧೂಳಿ |
ಊದುತ ಬಂದಿತು ಜಯ ಕಾಳಿ ||೨||

ಉಸುಕೂ ಹರಳೂ ಮಣ್ಣೆಲ್ಲಾ |
ತೂರುತ ಬಂದಿತು ಸುತ್ತೆಲ್ಲಾ ||೩||

ಅಬ್ಬಾ ಏನಿದು ಅರ್ಭಾಟ |
ನಡೆಯಿತು ಗಿಡಗಳ ಹೊಯ್ದಾಟ ||೪||

ಟೊಂಗೆಗಳೆಲ್ಲವು ಬಾಯ್ಮಾಡಿ |
ಬಿದ್ದವು ಭೂಮಿಗೆ ಮುಖ ಬಾಡಿ ||೫||

ಬಣವೆಯ ಶಿರವನು ಕತ್ತರಿಸಿ |
ಚೆಲ್ಲಿತು ಸುತ್ತಲು ಬಿತ್ತರಿಸಿ ||೬||

ಸುಮಗಳ ಚೆಲ್ವಿಕೆ ಸೂರಾಡಿ |
ಸಾಗಿತು ತರಗೆಲೆ ತೂರಾಡಿ ||೭||

ಹಕ್ಕಿಯ ಗೂಡನು ತುಂಡರಿಸಿ |
ಗರಿಗಳನೊಯ್ಯಿತು ಸಾವರಿಸಿ ||೮||

ಚಣದಲಿ ಭೀತಿಯ ಬೀರುವದು |
ಗೊಣಗುತ ಮುಂದಕೆ ಸಾಗುವದು ||೯||

# ಮಳೆರಾಯ

“ ಮಳೆರಾಯನೆ ನೀನೆಲ್ಲಿಂದ ಬಂದೆ ”
“ ಸಾಗರದಿಂದ ಹಾರುತ ಬಂದೆ ।
ಬೆಟ್ಟದ ಕಟ್ಟೆಯನೇರಲು ಹೋದೆ ।
ತಣಿವಿಗೆ ಇಳಿಯುತ ಭೂಮಿಗೆ ಬಂದೆ ।
ಮಿಂಚಿನ ಹೊಳಪನು ನೀಡುತ ನಲಿದೆ ।
ನೀಲ ನಭದೊಳು ಆಡುತ ಉಲಿದೆ ।
ಮುತ್ತಿನ ಮಳೆಹನಿ ಸುರಿಸುತ ಬಂದೆ ।
ಕೆರೆ ತೊರೆ ತುಂಬುತ ಓಡುತ ಬಂದೆ ।
ಭೂಮಿ ತಾಯಿಯನು ತಣಿಸಲು ಬಂದೆ ।
ಬಾಡುವ ಬೆಳೆಗೆ ಕಳೆಯನು ತಂದೆ ।
ರೈತಗೆ ಹಿಗ್ಗಿನ ಹೊನಲನು ತಂದೆ ।
ಎಲ್ಲರ ಮುಖದಲಿ ಕಳೆಯನು ತಂದೆ ।
ನಿನಗೀ ಕತೆಯನು ಹೇಳಲು ಬಂದೆ ॥ ”

## ದೇವನಾಟ

ಅರುಣ ಕಿರಣ ಜ್ಯೋತಿಯಿಂದೆ ।
ಜಗದ ಕಣ್ಣು ತೆರೆಯಿತು ॥
ಹೊನ್ನ ಬಣ್ಣ ಹೊಮ್ಮಿ ಚಿಮ್ಮಿ ।
ಭೂಮಿ ಭಾಗ್ಯ ಬೆಳೆಯಿತು ॥೧॥
ಕುಸುಮ ಬಳಗಕೆಲ್ಲ ಆಗ ।
ಹರುಷವುಕ್ಕಿ ಬಂದಿತು ॥
ಭೃಂಗ ನಿಕರಕೆಲ್ಲ ಬೇಗ ।
ಹಾಡೆ ದನಿಯು ತಂದಿತು ॥೨॥
ತಂಪು ಗಾಳಿ ಕಂಪು ಹೊತ್ತು ।
ಸೊಂಪಿನಿಂಪು ನೀಡಿತು ।
ಜಗದ ಜನವ ನಲಿಸೆ ತಾನು ।
ಅತ್ತಲಿತ್ತ ಚಲಿಸಿತು ॥೩॥
ಬಿಳಿಯ ಮುಗಿಲು ಮಾಲೆ ಹೊಳೆದು ।
ಇಳೆಯ ಸಿರಿಗೆ ಹಿಗ್ಗಿತು ॥
ಬಾನಿನಲ್ಲಿ ಕುಣಿದು ಕುಣಿದು ।
ಧರೆಗೆ ಸೊಬಗ ತಂದಿತು ॥೪॥
ಬಾನ ಬೆಡಗು ಬುವಿಯ ಸೊಬಗು ।
ಕಂಡು ಮನವು ಹಿಗ್ಗಿತು ॥
ಬಾಳ ದುಗುಡ ಮರೆಯೆ ದೇವನಾಟ ।
ವಿದುವೆ ತಿಳಿಯಿತು ॥೫॥

# ಟಾಂಗಾ ಕುದುರೆ

ಎದೆಗೋ ಇರುವದು ತೊಗಲಿನ ಪಟ್ಟಿ ।
ಕಣ್ಣಿಗೆ ಇರುವದು ಕಣ್ಣಿನ ಬುಟ್ಟಿ ॥
ಕೊರಳಲಿ ಇರುವದು ಗೆಜ್ಜೆಯ ಪಟ್ಟಿ ।
ಓಡುವದೊಂದೇ ಗುರಿಯನು ಮೆಟ್ಟಿ ॥೧॥

ಹೊಡೆಯಲು ಸಾರಥಿ ಬೆನ್ನಿಗೆ ನಿಂದು ।
ಕಪಿದಿಪೆ ಕತ್ತಲು ಕಣ್ಣಿಗೆ ಬಂದು ॥
ಒದೆಯುವೆ ಟಾಂಗಕೆ ಕೋಪದಿ ನೊಂದು ।
ಸಾಗುವೆ ಮುಂದಕೆ ಮನದಲಿ ಬೆಂದು ॥೨॥

ಹೊಡೆಯುವದೊಂದೇ ಅವನದು ಧರ್ಮ ।
ಓಡುವದೊಂದೇ ನಿನ್ನಯ ಕರ್ಮ ॥
ಹೊಟ್ಟೆಯ ಪಾಡಿಗೆ ಇನಿತೀ ಕರ್ಮ ।
ಎಂಬುದ ತಿಳಿಯಿತು ಎನಗೀ ಮರ್ಮ ॥೩॥

ದೇಹಕೆ ಕಷ್ಟವ ನಿನಗವ ಕೊಟ್ಟ ।
ಅವನಾ ಹೊಟ್ಟೆಗೆ ಅನ್ನವ ಕೊಟ್ಟೆ ॥
"ಹೊಟ್ಟೆಯು ಮಾಡಿತು ಮೂರಾಬಟ್ಟೆ" ।
ಎನ್ನುವ ಮಾತನು ತಿಳುಹಿಸಿ ಕೊಟ್ಟೆ ॥೪॥

ಭಾರಕೆ ಬಗ್ಗದ ಕರ್ಮಿಯು ಆಗಿ |
ಸೇವೆಗೆ ಕುಗ್ಗದ ಸೇವಕನಾಗಿ ||
' ಟಾಂಗಾ ಕುದುರೆ ' ಯು ಎಂಬವನಾಗಿ |
ತೋರುವೆ ಜನತೆಗೆ ತ್ಯಾಗಿಯು ಆಗಿ ||೫||

## ಕಾಗೆ

ಕರಿಯು ಬಣ್ಣದ ಕಾಗೆಯುದು |
' ಕಾ ಕಾ ' ಎಂದು ಕರೆಯುವದು ||೧||

ಅತ್ತಿಂದಿತ್ತ ಹಾರುವದು |
ಅನ್ನವ ಕಂಡರೆ ಕರೆಯುವದು ||೨||

ಬಂಧು ಬಳಗದಿ ಬೆರೆಯುವದು |
ತಿಂದೂ ತೇಗಿ ನಲಿಯುವದು ||೩||

ಜನರಾರೋಗ್ಯವ ಕಾಯುವದು |
ಜಗಕುಪಕಾರವ ಮಾಡುವದು ||೪||

ಕೂಡಿಯೆ ತಿನ್ನಲು ಹೇಳುವದು |
ಕೂಡಿಯೆ ಬಾಳಲು ಕಲಿಸುವದು ||೫||

# ತಾಯಿಗೆ

ನವಮಾಸ-ಗರ್ಭದೊಳು ಹೊತ್ತು ಹೆತ್ತಾಕೆ ।
ಪರಿಪರಿಯ ತಾಪಗಳ ಸಹಿಸಿ ಪೊರೆದಾಕೆ ॥೧॥

ಹಸುಗೂಸು ನಾನಿರಲು ಎಣ್ಣೆಹಚ್ಚುತ ಎರದೆ ।
ಹಲವು ತರದಾ ಹೆಸರು ಒಪ್ಪಿಟ್ಟು ಕರೆದೆ ॥೨॥

ಮೊಲೆಹಾಲು ಕುಡಿಯುತಲೆ ದಿನದಿನಕು ಬೆಳದೆ ।
ನಿನ್ನ ತೋಳ್ ತೊಟ್ಟಿಲದಿ ನಾ ನಿತ್ಯ ನಲಿದೆ ॥೩॥

ನೀನಲಿದೆ ನೀನೊಲಿದೆ ಜೋಗುಳವ ಪಾಡಿ ।
ಹಲವು ಬಗೆ ಆಟಿಗೆಯ ವಸ್ತುಗಳ ನೀಡಿ ॥೪॥

ನಾನಳಲು ನಿನಗೆನಿತು ಕಳವಳವು ತಾಯಿ ।
ನಾ-ನಗಲು ನಿನಗಮಿತ ಹರುಷ ನಲ್ ತಾಯಿ ॥೫॥

ಕನ್ನಡದ ಸವಿನುಡಿಯ ನುಡಿಯಲಿಕೆ ಕಲಿಸಿ ।
ನಾಡಿನಭಿಮಾನವನು ಹೃದಯದೊಳು ಇರಿಸಿ ॥೬॥

ಸಹನಶೀಲತೆಯಮಿತ ತ್ಯಾಗದಾ ಮೂರ್ತಿ ।
ನಿನ್ನಿಂದಲೇ ನಾಡಿನ್ನೈಸಿರಿಯ ಕೀರ್ತಿ ॥೭॥

ಓ ತಾಯಿ ನಿನಗಾರು ಸರಿಯಿಲ್ಲ ಜಗದಿ ।
ನಿನ್ನ ನುತಿಸುತ ಕಾಲ ನೂಕುವೆನು ಇಹದಿ ॥೮॥

ನಿನ್ನ ಉಪಕಾರವನು ಮರೆಯನೆಂದೆಂದು ।
ನಿನ್ನ ಸೇವೆಯ ಭಾಗ್ಯವಿರಲಿಂದು ಮುಂದು ॥೯॥

---

# ಕನ್ನಡಾಂಬೆ

ಕನ್ನಡಾಂಬೆಯ ಮೊಲೆಯ ಹಾಲ್ಗುಡಿದು ಬೆಳೆದವನು ।
ಕನ್ನಡವೆ ನನ್ನ ನಿಜ ಪ್ರಾಣ ಮಾನ ॥
ಕನ್ನಡವೆ ನನ್ನ ತನು, ಕನ್ನಡವೆ ನನ್ನ ಮನೆ ।
ಕನ್ನಡವೆ ಜೀವನದ ಮಾನ ಸನ್ಮಾನ ॥೧॥

ಕನ್ನಡದ ಭೂಗರ್ಭದಿಂದ ಬಾಳಿನ ಸಿರಿಯು ।
ಧನ ಧಾನ್ಯ ಸಂಪದವು ಸುಖಸೌಖ್ಯವು ॥
ಕನ್ನಡದ ಜಲದಿಂದ ಬದುಕು ಭಾಗ್ಯದ ಬೀಡು ।
ಜೀವನಕೆ 'ಜೀವನ'ವು ಜೇನಿನಿರವು ॥೨॥

ಕನ್ನಡದ ನುಡಿ ಸೊಂಪು, ನನ್ನ ನಾಲಿಗೆಗಿಂಪು ।
ಕನ್ನಡದ ಕವಿ ಹಾಡು ಅಮೃತ ಪಾನ ॥
ಕನ್ನಡದ ಕೂಜನದ ಮಧುರ ಕಂಠದ ಹಾಡು ।
ಕರ್ಣಮಾಧುರ್ಯವು ಮಂಗಳದ ಗಾನ ॥೩॥

ಕನ್ನಡದ ಶಿಲ್ಪಕಲೆ, ಮಾದರಿಯ ಚೆಲುವ ಕಲೆ ।
ಕನ್ನಡದ ಶಿಲ್ಪಿಗಳ ಕೈಕುಸುರು ಮಾಟ ॥
ಕನ್ನಡದ ಐಸಿರಿಯು, ಕನ್ನಡದ ಬನಸಿರಿಯು ।
ಹೊಗಳುವದೆ ನಾಲಿಗೆಗೆ ನಿತ್ಯ ರಸದೂಟ ॥೪॥

# ಸ್ವಾತಂತ್ರ್ಯ ದಿನ

ಸ್ವಾತಂತ್ರ್ಯದ ಶುಭ ದಿನವದು ತಾ
ವರುವರುಷವು ಬರುಬರುತಲಿದೆ ||
ನಮ್ಮೆದೆಯೊಳು ನವ ಚೇತನ ತುಂಬುತ |
ಹೊಸ ಹುರುಪನು ಅದು ತರುತಲಿದೆ ||೧||

ಹಳ್ಳಿಪಳ್ಳಿಯೊಳು ನಗರ ನಗರದೊಳು |
ಮೂಬಣ್ಣದ ಧ್ವಜ ಹಾರುತಿದೆ ||
ಅನುಪಮ ಶಾಂತಿಯ ಸಂದೇಶವನು |
ವಿಶ್ವದ ಜನತೆಗೆ ಸಾರುತಿದೆ ||೨||

ಭಾರತ ಭೂತಲದೆಲ್ಲೆಡೆಗೀ ದಿನ |
ನಗೆ ಹೊನಲನು ತಾ ಹರಿಸುತಿದೆ ||
ಭಾರತ ಭಾಗ್ಯವಿಧಾತನ ನೆನಹನು |
ನಮ್ಮೆದೆಯೊಳು ಸಲೆ ನಿಲಿಸುತಿದೆ ||೩||

ಭಾರತ ಧ್ವಜದಡಿ ಸೇವೆಯ ಸಲಿಸುತ |
ಬಾಳೆಲೊ ಕೀರ್ತಿಯ ಗಳಿಸುತಲಿ ||
ಸಮತೆ ಶಾಂತಿ ಸುಖ ಸಂಪತ್ತಿಗೆ ನಿಜ |
ತನು ಮನ ನೀಡುತ ತೋಷದಲಿ ||೪||

ದಲಿತೋದ್ಧಾರಿಯ ಜನಹಿತಕಾರಿಯ |
ನೆನೆಯುತ ಸಾಗಿಸು ಬಾಳುವೆಯ ||
ಭಾರತ ಮಾತೆಯ ಸೇವೆಗೆ ತನು ಮನ |
ಧಾರೆಯನೆರೆವುದು ಓ, ಗೆಳೆಯ ||೫||

# ನಮ್ಮ ಬಾವುಟ

ನೋಡಿದೊ ನೋಡಿದೊ ನಮ್ಮ ಬಾವುಟ ।
ಬಾಂದಳದಿ ಹಾರುತಿದೆ ಅಕೋ ಪಟಪಟ ।
ತೋರುತಿವೆ ಕೇಸರಿ, ಬಿಳಿ, ಹಸಿರು ಮೂರು ಬಣ್ಣ
ನಡುವಿಹುದು ಅಶೋಕ ಚಕ್ರವಣ್ಣಾ ॥

ಭಾರತದೀ ಸ್ವಾತಂತ್ರ್ಯದ ರವಿಯು ಪತಾಕೆ ।
ನಮಗಿತ್ತ ಸ್ವಾತಂತ್ರ್ಯ ತಿಳ್ಸಿಯಾ ನೆನಕೆ ।
ತರುತಿಹುದು ಚೊಕ್ಕ ಚಿನ್ನ ॥

ಮನೆ ಮಾರು ಧನ ಧಾನ್ಯವೀ ನಾಡಗುಡಿಯು ।
ಬಂಧು ಬಳಗವು ತಾಯಿ ತಂದೆ ರಾಷ್ಟ್ರಧ್ವಜವು ।
ಇದೆ ನಿನ್ನ ಪ್ರಾಣ ಮಾನ ॥

ಈ ನಾಡಗುಡಿಗಾಗಿ ನಿನ್ನ ಸೇವೆಯು ಸಲಿಸು ।
ಭಾರತಾಂಬೆಯು ಮನವ ಹರುಷಗೊಳಿಸು ।
ನೀಡು ನಿನ್ನ ತನು ಮನ ॥

# ಸಂಧ್ಯಾ ಕಾಲ

ಸಂಧ್ಯಾಕಾಲದ ಸುಂದರ ಸೃಷ್ಟಿಯ |
ಸೊಬಗನು ಸವಿಯಲು ಬನ್ನಿ ||
ದೇವನ ಲೀಲಾಜಾಲವನರಿಯಲು |
ಓಡುತೋಡುತಲೆ ಬನ್ನಿ ||
ಮುಳುಗುವ ತರಣಿಯ ಕೆಂಗಿರಣದ |
ಆ ಕಾಂತಿಯು ಛತ್ತೆಲ್ಲಾ ||
ಬಾನಲಿ ಬುವಿಯಲಿ ಹುಲ್ಲಲಿ ಹಸುರಲಿ |
ಹರಡಿದೆ ಸುತ್ತೆಲ್ಲಾ ||
ಮಂದಮಾರುತನು ಅಲೆಯುತ ಕರೆಯುವ
ದಿನಮಣಿ ಬೀಳ್ಕೊಡಲು ||
ತುಂಡು ಮೋಡದಾ ಹಿಂಡಿಗೆ ಹಿಂಡೇ |
ಹೊರಟಿದೆ ಕಳುಹಿಸಲು ||
ಹಕ್ಕಿಪಕ್ಕಿಗಳು ದಿನಪನ ಹೊಗಳುತ |
ಗೂಡಿಗೆ ಸಾಗುತಿವೆ ||
ಮರಬಳ್ಳಿಗಳು ಮೌನ ಮುದ್ರೆಯಲಿ |
ನಿಷ್ಠೆಯ ತೋರಿಸಿವೆ ||
ಕೆಂದಾವರೆ ತಲೆ ತಗ್ಗಿಸಿಕೊಂಡು |
ಕರುಣೆಯ ನೋಟದಿ ನೋಡುತಿದೆ ||

ಗೆಳೆಯನಗಲಿಕೆಯ ನೋವಿನ ಉರಿಯೊಳು ।
ಬೇಯುತ ಕಂದುತಿದೆ ॥

ಆಗಸದಂಚಿಗೆ ತುಂಬಿದೆ ।
ನೇಸರನಂತಿಮದಾ ಜ್ಯೋತಿ ॥

ಜಗದೆದೆಯಲಿ ತುಂಬಿದೆ ।
ರವಿಮಹಿಮೆಯ ಆ ಪಾವನ ಕೀರ್ತಿ ॥

ಜಗದುಪಕಾರಿಯ ನಿತ್ಯವು ನೆನೆವುದು ।
ದಿನದಾ ಮೊದಲನೆ ಕರ್ಮ ॥

ಜಗದೋದ್ಧಾರಿಯ ಧ್ಯಾನವ ಮಾಡುತ ।
ನಲಿವುದೆ ನಮ್ಮಯ ಧರ್ಮ ॥

# ಉಗಿಬಂಡಿ

ಬಂದಿತು ಬಂದಿತು ಹೊಗೆಬಂಡಿ ।
ಸೀಟಿಯನೂದುತ ಉಗಿಬಂಡಿ ॥

"ಭಕ್‌ಚಕ್ ಭಕ್‌ಚಕ್" ದನಿಯಿಂದ ।
ಓಡುತ ಬಂದಿತು ಮುದದಿಂದ ॥

ಕಲ್ಲಿದ್ದಲಿಯೇ ಅದಕಾಹಾರ ।
ಕುಡಿಯಲು ಬೇಕು ತಣ್ಣೀರ ॥

ಹಸಿರು ನಿಶಾನೆಗೆ ಹೊರಡುವದು ।
ಹಳಿಗಳ ಮೇಗಡೆ ಓಡುವದು ॥

ಎಲ್ಲರು ಒಂದೇ ಎನ್ನುವದು ।
ಭೇದವನೆಣಿಸದೆ ದುಡಿಯುವದು ॥

ತಿರುಗುತ ಬಾಳನು ನೂಕುವದು ।
ಮರೆಯದೆ ಕೆಲಸವ ಮಾಡುವದು ॥

ಕಾಲದ ಮಹತಿಯು ಅದಕಿಹುದು ।
ಕರ್ಮದ ಹಿರಿಮೆಯ ಅರಿಪಿಹುದು ॥

# ಗುಲಾಬಿ ಹೂ

ಮನವನು ಸೆಳೆಯುವ ಸುಂದರ ಹೂವೇ ।
ಓ, ಚೆಲು ಗುಲಾಬಿ ನೀ ಬಲು ಜಾಣೆ ॥
ಸುಮಗಳ ರಾಣಿ ಓ, ಚೆಲುವಿನ ಖಣಿ ।
ನಿನ್ನಂದವ ನಾನೆಲ್ಲಿಯು ಕಾಣೆ ॥
ನಿನ್ನಾ ದಳಗಳ ಗುಂಪಿನ ಸೊಂಪಿಗೆ ।
ಒಲಿಯದವರು ಯಾರು ? ॥
ನಿನ್ನೊಳಗಡಗಿಹ ಕಂಪಿನ ಸೆಳೆತಕೆ ।
ಸಿಲುಕದವರು ಯಾರು ? ॥
ನಿನ್ನೀ ಚೆಲುವಿಕೆ, ಮಧುರತೆಯಿಂದ ।
ಅಳಿಗಳ ಬಳಗಕೆ ಆನಂದ ॥
ಮಧುವನು ಸವಿದೂ ಉಲಿವವು ನಲಿದೂ ।
ಸುಸ್ವರದಿಂಪಿನ ಪೆಂಪಿಂದ ॥
ನಿನ್ನಿಂದಲೆ ಹೂದೋಟಕೆ ಚೆಂದ ।
ಹೂದೋಟದಿ ನೀನಿದ್ದರೆ ಅಂದ ॥
ಜನರಾನಂದವೆ ನಿನಗಾನಂದವೊ ।
ಅದಕೀ ನಗೆಯೇನು ? ॥
ನಿನ್ನೀ ನಗೆಯನು ನನಗೂ ಕೊಡು ನೀ ।
ನಗುತಲೆ ಬಾಳನು ನೂಕುವೆನು ॥

# ರೈತ

ಮಣ್ಣಿನ ಮಗನೇ ರೈತ ।
ಅನ್ನವನೀಯುವ ತಾತ ॥ಪ॥

ಬಿರು ಬಿಸಿಲಲಿ ಮೈ ಕೊರೆಯುವ ಚಳಿಯಲಿ ।
ನೇಗಿಲ ಹೊಡೆಯುವನು ॥

ಭೂಮಿ ತಾಯಿಗೆ ಬೆವರನು ಸುರಿಸುತ ।
ಸೇವೆಯ ಸಲಿಸುವನು ॥

ಮುತ್ತಿನ ಮಳೆಹನಿ ಸುರಿಸಲು ಮೇಘವು ।
ಭೂಮಿಯನುಳುತಿಹನು ॥

ಗುಡುಗಿನ ಗರ್ಜನೆಯಿಂದರೆ ಹಿಗ್ಗುತ ।
ತಾಪವ ಮರೆಯುವನು ॥

ಬೆಳೆ ಸಿರಿಯಲ್ಲಿಯೆ ಭೂಶ್ರೀ ಕಾಣುತ ।
ಹರುಷದಿ ಹಾಡುವನು ॥

ಹಕ್ಕಿಯ ಹಾರಿಸಿ, ಕಾಳನು ರಕ್ಷಿಸಿ ।
ಕಣವನು ಮಾಡುವನು ॥

ಹಂತಿಯ ಹೊಡಿ ರಾಶಿಯ ಮಾಡಿ ।
ದಾನವ ಮಾಡುವನು ॥

ಎಲ್ಲರ ಹೊಟ್ಟೆಗೆ ಅನ್ನವನೀಯುವ ।
ಕಾಯಕ ಸಲಿಸುವನು ॥

ದಾನಿಯು ಧರ್ಮಿಯು ಕರ್ಮಿಯು ಅವನೇ ।
ವರ ನೇಗಿಲಯೋಗಿ ॥

" ಕೈ ಕೆಸರಾದರೆ ಬಾಯ್ ಮೊಸರಾಗ್ವುದು " ।
ಎಂಬುದ ತಿಳಿಸುವ ತ್ಯಾಗಿ ॥

ತನ್ನೀ ಕಾಯಕ ಗೈಯುತ ಬಾಳನು ।
ಅಮಿತಾನಂದದಿ ಕಳೆಯುವನು ॥

ಪರೋಪಕಾರಕೆ ತನು ಮನ ನೀಡುತ ।
ಬಾಳುವೆಗೇ ಬೆಳಕಾಗಿಹನು ॥

---

# ಮೇಣಬಸದಿ

ಮೇಣಬಸದಿಯು ನೋಟ |
ಕಲೆಯು ಚೆಲುವಿನ ತೋಟ
ಬಾದಾಮಿ ಭಾಗ್ಯದಾ ಸಿರಿಯು ಸೊಬಗು ||ಪ||

ಚಾಲುಕ್ಯರಾ ಒಲ್ಮೆ |
ಶಿಲ್ಪಕಲೆಯಾ ಮೇಲ್ಮೆ |
ಕನ್ನಡದ ಸಂಸ್ಕೃತಿಯು ತೋರುತಿಹುದು |
ಕಾಯುವಳಿದರು ಕೀರ್ತಿ ಅಳಿಯದಿಹುದು ||೧||

ಕಲ್ಲ ಕೊನರಿಸಿದಂಥ |
ಕಲೆಯು ಚೆಲುವಿನ ಬಳ್ಳಿ |
ಅರಳಾಗಿ ಸೌರಭವ ಸೂಸುತಿಹುದು |
ಪರಿಮಳವ ಬೀರುತಲೆ ನಲಿಸುತಿಹುದು ||೨||

ಪಸಿವು ತೃಷೆಯುನು ಪರಿಸಿ |
ನೂರು ತಾಪವನಳಿಸಿ |
ಆತ್ಮಶಾಂತಿಯುನೆಮಗೆ ಬೀರುತಿಹುದು |
ಆನಂದ ಲೋಕಪಡೆಗೊಯ್ಯುತಿಹುದು ||೩||

---

# ಪೊರಕೆ

ಹುಲ್ಲಿನ ದೇಹದ ಸುಂದರ ಪೊರಕೆಯೆ ।
ಕಸವನು ಬಳಿಯಲು ನೀನೇ ಬೇಕು ॥
ಮೇಲಿದು ಕೀಳಿದು ಎಂಬುದನಳಿದು ।
ದುಡಿಯುವದೊಂದೇ ನಿನಗದು ಸಾಕು ॥೧॥

ದೀನರ ಭವನದಿ ಧನಿಕರ ನಿಲಯದಿ ।
ಒಂದೇ ಭಾವದಿ ದುಡಿಯುವ ಪೊರಕೆ ॥
ಮಾನಾಭಿಮಾನದ ಆಶೆಯು ತೊರೆದು ।
ಎಲ್ಲಿ ಬೇಕಲ್ಲಿಯೆ ಇರುತಿಹ ಪೊರಕೆ ॥೨॥

ಹೊಲಸನು ಬಳಿದೂ ಕೊಳೆಯನು ಕಳೆದೂ ।
ಬಾಳನು ನಗುತಲೆ ನೂಕುತಲಿರುವೆ ॥
" ಪರೋಪಕಾರವೆ ಪುಣ್ಯ " ವೆಂಬೀ ।
ಮಾತನು ಮೌನದಿ ಸಾರುತಲಿರುವೆ ॥೩॥

ಎಲ್ಲರ ಮನೆಯೊಳು ನಿರುತವು ದುಡಿಯುವ ।
ನಿನ್ನೀ ಮಹತಿಯು ಮರೆತಿಹರೇನು ? ॥
ನಿನ್ನೊಳಹೊರಗಿನ ಹೊಲಸನು ಕಳಕೋ ।
ಎನ್ನುತ ನೀನಿದೊ ಮಡಿಯುವೆಯೇನು ? ॥೪॥

# ಕಲ್ಪನಾ ಲೋಕ

ಆಡಲು ಚಂದ್ರನು ನನ್ನೊಡ ಬರುವನು ।
ತಾರಾ ಬಳಗದಿ ತಾ ಕೂಡಿ ॥
ಹಾಡಲು ಕೋಗಿಲೆ ದನಿಯನು ಕೊಡುವದು ।
ಮಕ್ಕಳ ಬಳಗಕೆ ನಲಿದಾಡಿ ॥೧॥

ಕುಣಿಕುಣಿದಾಡಲು ನಲಿನಲಿದಾಡಲು ।
ಗಿರಿಯಿಂದೈತರುವದು ನವಿಲು ॥
ಚೆಲು ಮಾತಾಡುತ ಗಿಳಿ ತಾ ನನ್ನೊಳು ।
ಬೆರೆಯಿಸುವದು ಸಕ್ಕರೆ ಹಾಲು ॥ ॥೨॥

ತಾಳವ ಹಾಕುತ ಹುಮ್ಮಸ ನೀಡುತ ।
ಉಲಿವುದು " ಟಿಂವ್ ಟಿಂವ್ " ಟಿಂವಕ್ಕಿ ॥
ನಗೆ ಬೆಳದಿಂಗಳಿನೈಸಿರಿಯಲ್ಲಿಯೆ ।
ನಲಿದಾಡುವದೈ ಮನವುಕ್ಕಿ ॥೩॥

ಅಂದದಿ ಆಡುವ ಮಕ್ಕಳ ನೋಡಲು ।
ಬರುವನು ದೇವನು ಹರುಷದಲಿ ॥
ಕಾಣದೆ ಕುಳಿತು ನಲಿದೊಲಿಯುವನು ।
ಮೋಡದ ಬಂಡಿಯನೇರುತಲಿ ॥೪॥

# ಕಾಶಿಯ ಯಾತ್ರೆ

ಕಾಶಿಯ ಯಾತ್ರೆಗೆ ಹೊರಟಿಹರಿಬ್ಬರ ।
ಕಂಡೆನು ನಾ ಉಗಿಬಂಡಿಯಲಿ ॥
ಅವರೆದುರಲ್ಲಿ ಕುಳಿತೆನು ಬಂದು ।
ಗೆಳೆಯನ ಮುಗ್ಗುಲಲಿ ॥೧॥

ಮೂರನೆ ವರ್ಗದ ಡಬ್ಬಿಯೊಳಿಬ್ಬರು ।
ಗದ್ದಲವಿದ್ದರು ಮಲಗಿಹರು ॥
ಅವರಾ ವೇಷಕೆ ಬೆದರಿದ ಕೆಲ ಜನ ।
ಏಳೆನ್ನದೆ ತಾವ್ ನಿಂತಿಹರು ॥೨॥

'ಬಾಗಿಲುಕೋಟೆ'ಯ ನಿಲ್ದಾಣ್ ಬಂದಿತು ।
ಗದ್ದಲ ಮೀರಿತು ಗಾಡಿಯಲಿ ॥
"ಅಯ್ಯಾ ಏಳಿರಿ" ನಿಂತಿಹರೆಲ್ಲರು ।
ಜಾಗವ ನೀಡಿರಿ ಬಳಿಯಲ್ಲಿ ॥೩॥

ತರುಣನು ಎಬ್ಬಿಸೆ ಬಿದ್ದರು ಇಬ್ಬರು ।
ಕೋಪದಿ ಮಾತಿನ ಕಾಳಗಕೆ ॥
ನಿಂತಿಹರೆಲ್ಲರ ನುಡಿಯೊಂದಾಗಲು ।
ಮಲಗಿದರೆದ್ದರು ಮೇಲಕ್ಕೆ ॥೪॥

ಕೂಡಲೆ ಕೆಲಜನ ಕುಳಿತರು ಮಗ್ಗಲು ।
ಮುಗಿಯಿತು ಮಾತಿನ ಒಣಜಗಳ ॥
ಪೆರವರ ಹಿತವನು ಬಯಸದ ಕಾಲಿಯು ।
ಯಾತ್ರೆಯ ಹಿರಿಯರ ಬರಿಜಗಳ ॥೫॥

ಬತ್ತಿದ ಕೂಸನು ಬಗಲೊಳು ಎತ್ತಿಹ ।
ಭಿಕ್ಷುಕಿ ಬಂದಳು ಬೇಡಲಿಕೆ ॥
ಅವರಿವರಿತ್ತುದ ಕೊಳ್ಳುತ ನಮಿಸುತ ।
ಹಾಡುತ ಬಂದಳು ಮುಂದಕ್ಕೆ ॥೬॥

ಯಾತ್ರೆಗೆ ಹೊರಟಿಹರಿಬ್ಬರ ಮುಂಗಡೆ ।
ನಿಂದಳು ಕೈಚಾಚಿ ॥
ನೋಡದೆ ಸುಮ್ಮನೆ ಕುಳಿತುದ ಕಂಡು ।
ನಡೆದಳು ಮುಂದಕೆ ಮೈಚಾಚಿ ॥೭॥

ಪೂಲಿನ ಗಡಗಡ ಸಪ್ಪಳ ಕೇಳಿತು ।
ರೊಕ್ಕವನೆಸೆದರು ನದಿಯಲ್ಲಿ ॥
‘ಕೃಷ್ಣೆಯು ನಕ್ಕಳು, ಗಾಡಿಯು ಓಡಿತು ।
ನದಿಯಾಚೆಗಿನಾ ದಡದಲ್ಲಿ ॥೮॥

---

## ' ಗಾಂಧಿ ಅಜ್ಜ '

ಗಾಂಧಿ ಅಜ್ಜ ನಮ್ಮ ತಾತ ಶಾಂತಿದಾತನು ।
ಭಾರತಾಂಬೆ ಶ್ರೇಷ್ಠ ಪುತ್ರ ಭಾಗ್ಯದಾತನು ॥೧॥

ಸತ್ಯ ಶಾಂತಿ ದಯಾ, ಧರ್ಮ ಮೂರ್ತಿ ಮಾನ್ಯನು ।
ಮನುಜ ಕುಲಕೆ ನೀತಿ ನೇಹ ನೀಡಿದಾತನು ॥೨॥

ಶುಭ್ರ ಖಾದಿ ಧರಿಸಿದಂಥ ನಗುವ ಮೂರ್ತಿಯು ।
' ಮಾಡು ಇಲ್ಲವೆ ಮಡಿಯೊ ' ಯೆಂದ
ದಿವ್ಯ ತ್ಯಾಗಿಯು ॥೩॥

ದೀನ ದಲಿತರೇಳ್ಗೆಗಾಗಿ ದುಡಿದ ಪಾವನಾತ್ಮನು ।
ಜನರ ಸೇವೆಗಾಗಿ ತನುವ ನೀಡಿ ನಲಿದ ತಾತನು ॥೪॥

" ದೇಶಸೇವೆ ಈಶಸೇವೆ " ಎನುವ ಯೋಗಿಯು ।
ಧರ್ಮ ಕರ್ಮ ಮರ್ಮವರಿತ ಜ್ಞಾನ ಜ್ಯೋತಿಯು ॥೫॥

ಜಗದ ರೀತಿ ನೀತಿ ಕಂಡು ಮನದಿ ಮರುಗಿದ ।
ಸತ್ಯ ಶಾಂತಿ ನೇಹ ಪಾಠ ಜಗಕೆ ಕಲಿಸಿದ ॥೬॥

# ಸಿದ್ದಿಕ ಸಿದ್ದಿ

"ಸಿದ್ದಿಕ ಸಿದ್ದಿ
ಬೌವರೆ ಸಿದ್ದಿ ।
ಹಗೆದಾಗ ಬಿದ್ದಿ
ಹಳೆ ಜೋಳ ತಿಂದಿ"
ಎನ್ನುತ ಬಂದನು ಆ ಸಿದ್ದಿ ॥೧॥

ಉದ್ದನ ಮೂಗು
ಜೊಂಡಿಗೆ ಮೀಸಿ ।
ತಳೆದಿಹ ಬಂಣ
ಚಾಳಿಸಗಂಣಾ ।
ಮಕ್ಕಳಿಗೊಂದು ಮೋಜಿನ ಸಿದ್ದಿ ॥೨॥

ಉಬ್ಬಿದ ತಿಗಗಳ । ನುಬ್ಬಿಸಿದುಬ್ಬಿಲೆ ।
ಮೈ ಕೈ ಹೊರಳಿಸಿ । ದನಿಯನು ಏರಿಸಿ ।
ಕುಣಿಕುಣಿದಾಡುವ ಸಿದ್ದಿಕ ಸಿದ್ದಿ ॥೩॥

ಹೊಟ್ಟೆಯು ತಳಮಳ ।
ಗಿಲ್ ಗಿಲ್ ಸಪ್ಪಳ ।
ಬಿರುಬಿಸಿಲೆನ್ನದೆ । ಮನೆಮನೆಯಲೆಯುವ ।
ಅವನೀ ಕರ್ಮದ ಪರಿ ನೋಡು ॥೪॥

ಊಟಿಕೆ ಹಾಕಿರಿ । ಉಡುಗರೆ ನೀಡಿರಿ
ಸಾಕಿರಿ ಸಲಹಿರಿ । ಎನ್ನುವ ಸಿದ್ದಿಗೆ
ಬಾಳಿನ ಬೆಳಕನು ನೀ ನೀಡು ॥೫॥

# ಮಕ್ಕಳಿಗೆ ಮಿಠಾಯಿ

ಬೇಕೇ, ಮಕ್ಕಳೆ ! ಮಿಠಾಯಿ ಬೇಕೇ ।
ಅಕ್ಕರೆ ಸಕ್ಕರೆ ಮಿಠಾಯಿ ಬೇಕೇ ॥ಪ॥

ಬುಂದೇ, ಬೇಸನ್, ಜಿಲೇಬಿ ಅಂಟು ।
ಮಕ್ಕಳಿಗಕ್ಕರೆ ಪೆಪ್ಪರಮೆಂಟು ।
ಖವ್ವಾ ಪೇಡೆ ಬಿಸ್ಕೀಟ ಉಂಟು ॥೧॥

ಮೈಸೂರ್ಪಾಕು, ಮಕಮಲ್ ಪುರೆಯು ।
ಬೆಂಡೂ, ಬೆತ್ತಾಸ, ಶಂಕರಪಾಳೆಯು ।
ಬಂಬೈ ಮಿಠಾಯಿ, ಬಾಲೂಸಿಯು ॥೨॥

ಇದೊ ಈ ಮಿಠಾಯಿ, ನಿಮಗಾಗಿ ।
ಇದರೊಳಗಿಹುದೈ ಹಲವು ಬಗೆ ।
ತಿನಿಸೇ ತಣಿಯಿರಿ ಮಗುಗಳಿಗೆ ॥೩॥

ಅಳುತಿಹ ಕಂದಾ ! ನಿನಗಾನಂದ ।
ನೀಡುವದಿದು ರುಚಿ ಶುಚಿಯಿಂದ ।
ನುಡಿಜೇನಿನ ಸವಿ ಸವಿಯಿಂದ ॥೪॥

# ಕೋಗಿಲೆ

“ ಅವ್ವ ಅವ್ವಾ ” ಯೆಂದು ಕೂಗುತಿಹ ಕೋಗಿಲೆಯೆ ।
ನಿನ್ನ ತಾಯಿಯ ನೆನಹು ಬಂದಿತೇನು ॥
ಸುಪ್ರಭಾತದ ಚೈತ್ರ ಚೆಲುವು ನಿನ್ನ ಕಂಠಕ್ಕೆ ।
ಹೊರಹೊಮ್ಮಿ ಗಾನರಸ ಚಿಮ್ಮಿತೇನು ॥೧॥

ನನ್ನಮ್ಮನನು ನಾನು ಕೂಗಿ ಕರೆಯುವ ತೆರದಿ ।
ಕೂಗುತಿಹೆ ನಿನಗೇಕೆ ಈ ಮಚ್ಚರ ॥
ನಿನ್ನನಣಕಿಪೆನೆಂದು ।
ನಾನು ಕೂಗುತಲಿರುವೆ ।
“ ಕುಹೂ ಕುಹೂ ” ಯೆಂದು ಇರಲೆಚ್ಚರ ॥೨॥

ಏನಾದರೇನಂತೆ ಕರೆದುಕೋ ಕೂಗುವೆನು ।
ನಿನ್ನ ಇನಿ ದನಿಯಲ್ಲಿ ದನಿಯ ಬೆರಿಸಿ ॥
“ ಕುಹೂ ಕುಹೂ ” ಯೆಂದು ಕೂಗೋಣ ಒಂದಾಗಿ ।
ಲೋಕದಾ ಜನರಿಗಾನಂದ ಬಯಸಿ ॥೩॥

# ಪ್ರಾರ್ಥನೆ

ನೀನೆ ಕರುಣಾಳು ಓ, ದೀನ ಬಂಧು ! ।
ನಿನ್ನ ದಯುವಿರಲೆನಗೆ ಜ್ಞಾನ ಸಿಂಧು ! ! ||ಪ||

ನಿಜವನೆ ನುಡಿಯುವಾ ।
ನುಡಿದಂತೆ ನಡೆಯುವಾ ।
ಬುದ್ಧಿ ಬಲವನು ನೀಡು ನೀನೆ ದೇವಾ ! ||

ಈ ನಾಡು ನುಡಿಗಾಗಿ ।
ಹಗಲಿರುಳು ದುಡಿಯುವಾ ।
ಶಕ್ತಿ-ಭಕ್ತಿಯ ನೀಡು ನೀನೆ ದೇವಾ ! ! ||೧||

ಮರೆ-ಮೋಸ ಕಟುಹಾಸ ।
ಮದ ಮತ್ಸರಾದಿಗಳು ।
ನನ್ನ ಎದೆಯಲಿ ಸುಳಿಯದಿರಲಿ 'ಕರುಣಿ' ||

ನಾನು ನನ್ನವರೆಂಬ ।
ಪ್ರೀತಿ ಭಾವನೆ ಬೆಳೆದು ।
ಸಾಗರದ ಸರಿಸಮಕೆ ನಿಲಲಿ 'ಕರುಣಿ' ! ! ||೨||

ಭಕ್ತ ರಕ್ಷಕ ನೀನು ।
ಮೋಕ್ಷದಾಯಕ ನೀನು ।
ನಿರುತ ಸುಜ್ಞಾನ ಬೆಳಕೆನಗೆ ನೀಡು ! ||

ನಿನ್ನ ಪ್ರಾರ್ಥನೆ ನನ್ನ ।
ನಾಲಿಗೆಯ ಮೇಲಿರಲಿ ।
ಕವಿಯುತಿಹ ಕತ್ತಲೆಯ ನೊತ್ತ ದೂಡು ||೩||

ನೀನೆ ಕರುಣಾಳು ಓ, ದೀನ ಬಂಧು ! ।
ನಿನ್ನ ದಯವಿರಲೆನಗೆ ಜ್ಞಾನಸಿಂಧು ! ! ||

---

## ಲಲಿತ ಸಾಹಿತ್ಯಮಾಲೆ

### ಜಾಲೀಹಾಳ

**ಶಾಖೆ ಪಟ್ಟದಕಲ್ಲು**

## ● ಮುಂಬರುವ ಕೃತಿಗಳು ●

(೧) ಬಂಬೈ ಮಿಠಾಯಿ (ಹನಿಗತೆಗಳು) ದೇವರಾಯ ಗುದ್ನೆಣ್ಣವರ

(೨) ಕಿಡಿಕಿಡಿ ಕಡ್ಡಿ (ಮಕ್ಕಳ ಪದಗಳು) ಪರಶುರಾಮ ಚಿತ್ರಗಾರ.

(೩) ಗೋಲಿಯ ಗುಂಡು ,,

—ಪ್ರಕಾಶಕರು.